# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

# 27ನೇ ಕರ್ನಾಟಕ ರಾಜ್ಯ ಜಾಂಬೋರೇಟ್ 2014




## ಉದ್ದೇಶ : ನೆಲ ಜಲ ರಕ್ಷಣೆ, ನಮ್ಮೆಲ್ಲರ ಹೊಣೆ

# ಜಾಂಬೋರೇಟ್ ಕಿರು ಹೊತ್ತಿಗೆ

**ಸ್ಥಳ :**

**ಡಾ|| ಆನಿ ಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್**

**ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರ,**

**ಬೆಂಗಳೂರು ಗ್ರಾಮಾಂತರ ಜಿಲ್ಲೆ.**

**ದಿನಾಂಕ :**

**17 ರಿಂದ 23 ಆಗಸ್ಟ್ 2014**

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ**

ರಾಜ್ಯ ಪ್ರಧಾನ ಕಛೇರಿ, ಪ್ರೋ. .ಶಿವಶಂಕರ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ,

ಕೋಟೆ, ಬೆಂಗಳೂರು-560 002.

## ಜಾಂಬೋರೇಟ್ ಪರಿಷತ್

| | |
|---|---|
| ಪೋಷಕರು | **ಗೌರವಾನ್ವಿತ ರಾಜ್ಯ ಪಾಲರು,**<br>ಕರ್ನಾಟಕ ಸರ್ಕಾರ |
| ಅಧ್ಯಕ್ಷರು | **ಶ್ರೀ ಡಿ.ವಿ. ಸದಾನಂದಗೌಡ,**<br>ಸನ್ಮಾನ್ಯ ಕೇಂದ್ರ ರೈಲ್ವೇ ಸಚಿವರು, ಭಾರತ ಸರ್ಕಾರ |
| ಉಪಾಧ್ಯಕ್ಷರುಗಳು | **ಶ್ರೀ ಪಿ.ಜಿ.ಆರ್.ಸಿಂಧ್ಯಾ**<br>ಮಾನ್ಯ ಗೃಹ, ಕೈಗಾರಿಕೆ ಹಾಗೂ ಹಣಕಾಸು ಇಲಾಖೆಗಳ ಮಾಜಿ ಸಚಿವರು, ಕರ್ನಾಟಕ ಸರ್ಕಾರ |
| | **ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ**<br>ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಇಲಾಖೆ ಮಾಜಿ ಸಚಿವರು, ಕರ್ನಾಟಕ ಸರ್ಕಾರ |
| | **ಶ್ರೀ ಜಿ.ಜನಾರ್ಧನ ರೆಡ್ಡಿ**<br>ಮಾನ್ಯ ಪ್ರವಾಸೋದ್ಯಮ, ಯುವಸಭಲೀಕರಣ ಹಾಗೂ ಮೂಲಭೂತಸೌಕರ್ಯ ಅಭಿವೃದ್ಧಿ ಇಲಾಖೆಗಳ ಮಾಜಿ ಸಚಿವರು, ಕರ್ನಾಟಕ ಸರ್ಕಾರ |
| | **ಶ್ರೀಮತಿ ಸರೋಜ ವಿ. ನಾಯ್ಡು**<br>**ಶ್ರೀಮತಿ ಭಾರತಿ ಚಂದ್ರಶೇಖರ್** |
| ಜಾಂಬೋರೇಟ್ ಮುಖ್ಯಸ್ಥರು | **ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ,**<br>ರಾಜ್ಯ ಮುಖ್ಯ ಆಯುಕ್ತರು |
| ಜಾಂಬೋರೇಟ್ ಉಪ-ಮುಖ್ಯಸ್ಥರು | **ಶ್ರೀ ಬಿ.ಎಸ್.ಲೂಕಾಸ್,**<br>ರಾಜ್ಯ ಆಯುಕ್ತರು (ಸ್ಕೌಟ್ಸ್) |

# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

## 27ನೇ ಕರ್ನಾಟಕ ರಾಜ್ಯ ಜಾಂಬೋರೇಟ್ 2014

ಜಾಂಬೋರೇಟ್‌ನ ವಿವರ ಈ ಕೆಳಕಂಡಂತಿದೆ

**ಜಾಂಬೋರೇಟ್ ನಡೆಯುವ ಸ್ಥಳ :-**

27ನೇ ಕರ್ನಾಟಕ ರಾಜ್ಯ ಸ್ಕೌಟ್ ಗೈಡ್ ಜಾಂಬೋರೇಟ್ ಡಾ|| ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಏರ್ಪಡಿಸಿದೆ. ಬೆಂಗಳೂರು ನಗರದಿಂದ 40.00ಕಿಲೋಮೀಟರ್ ಹಾಗೂ ಕೆಂಪೇಗೌಡ ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣದಿಂದ 24.ಕಿ.ಮೀ.ದೂರದಲ್ಲಿದೆ.

**ಕಾರ್ಯಕ್ರಮದ ದಿನಾಂಕಗಳು:-**

27ನೇ ಕರ್ನಾಟಕ ರಾಜ್ಯ ಸ್ಕೌಟ್ ಗೈಡ್ ಜಾಂಬೋರೇಟ್ 17ನೇ ಆಗಸ್ಟ್ 2014 ರಿಂದ 23ನೇಆಗಸ್ಟ್ 2014 ರವರೆವಿಗೆ 7 ದಿನಗಳ ಕಾಲ ನಡೆಯುತ್ತದೆ.

**ಕಂಟಿನ್‌ಜಂಟ್‌ಗಳ ರಚನೆ :-**

ತಂಡ/ಕಂಪನಿಯನ್ನೊಳಗೊಂಡ ಕಂಟಿನ್‌ಜಂಟ್‌ಗಳು ಇರುವ ವಿಧಾನ 32 ಸ್ಕೌಟ್ / ಗೈಡ್ ಇರುವ ತಂಡ / ಕಂಪನಿ, ತಮಗೆ ನೀಡಿರುವ ಕೋಟಾದಂತೆ ಸ್ಕೌಟ್ ಮಾಸ್ಟರ್/ ಗೈಡ್ ಕ್ಯಾಪ್ಟನ್ ಹಾಗು ವಯಸ್ಕ ಸೇವಾ ನಾಯಕರ ರಚನೆ ಮಾಡಬೇಕು. ವಿವರ ಕೆಳಗಿನಂತಿದೆ.

- ತಂಡದ ನಾಯಕರು
- ತಂಡದ ಸಹಾಯಕ ನಾಯಕರು
- ಕ್ವಾರ್ಟರ್ ಮಾಸ್ಟರ್
- ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳ ನಾಯಕರುಗಳು.

ಪ್ರತಿ ಜಿಲ್ಲೆ ಒಬ್ಬ ಹೆಚ್ಚುವರಿ ತಂಡದ ನಾಯಕರನ್ನು ಆರಿಸಿ ಸಿದ್ಧಮಾಡಿರಬೇಕು. ಅವಶ್ಯಕತೆ ಇದ್ದಲ್ಲಿ ಅವರಿಗೆ ಜಾಂಬೊರೇಟ್‌ನಲ್ಲಿ ಬೇರೆ ಜವಾಬ್ದಾರಿ ನೀಡಲಾಗುವುದು.

ತಂಡಗಳ ನಾಯಕರುಗಳು ತಮ್ಮ ಜಿಲ್ಲೆಗಳ ಸ್ಕೌಟ್ /ಗೈಡ್‌ಗಳ ನಾಯಕರು. ಅವರು ಜಾಂಬೊರೇಟ್‌ನ್ನು ಯಶಸ್ವಿಯಾಗಿ ಜರುಗಲು ಮತ್ತು ಕಾರ್ಯಕ್ರಮ ಹಾಗೂ ಚಟುವಟಿಕೆಗಳು ಯಶಸ್ವಿಯಾಗಲು ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸಬೇಕು.

1. ಜಿಲ್ಲೆಯ ತಂಡವನ್ನು ಜಾಂಬೊರೇಟ್‌ಗೆ ಕರೆ ತರುವುದು
2. ತಂಡದ ಶಿಸ್ತು , ಸಮಯ ಮತ್ತು ಕ್ರಮಬದ್ಧತೆಯ ಜವಾಬ್ದಾರಿ
3. ತಂಡಕ್ಕೆ ಅವಶ್ಯವಾದ ಸಂಧರ್ಭದಲ್ಲಿ ಸಿಗುವಂತಿರಬೇಕು.
4. ತಂಡವನ್ನು ಜಾಂಬೊರೇಟ್‌ನ ಎಲ್ಲಾ ಚಟುವಟಿಕೆಗಳಲ್ಲಿ ಸೂಕ್ತವಾಗಿ ಮತ್ತು ಕ್ರಮಬದ್ಧವಾದ ಸಮವಸ್ತ್ರದೊಂದಿಗೆ ಭಾಗವಹಿಸಲು ಸೂಚಿಸಬೇಕು.
5. ಸಾಧ್ಯವಾದರೆ ಪೆಟ್ರೋಲ್‌ನಲ್ಲಿ ಅಡುಗೆ ಮಾಡುವುದು ಮತ್ತು ಶಿಬಿರದ ಅತ್ಯುತ್ತಮ ಶ್ರೇಣಿ ಪಡೆಯಲು ಪ್ರಯತ್ನಿಸಬೇಕು.
6. ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳನ್ನು ಗುಂಪುಗಳಾಗಿ ವಿಂಗಡಿಸಿ ಕೆಲಸ-ಕಾರ್ಯಗಳನ್ನು ಹಂಚುವುದು ಮತ್ತು ಅವುಗಳ ಜವಾಬ್ದಾರರಾಗುವಂತೆ ತಿಳಿಸುವುದು,
7. ಬೆಳಗಿನ ತಪಾಸಣೆ ವೇಳೆಯಲ್ಲಿ ಸ್ವತಃ ಮೇಲ್ವಿಚಾರಣೆ, ಗ್ಯಾಡ್ಜೆಟ್ಸ್, ಪಯಾನಿರಿಂಗ್ ಪ್ರಾಜೆಕ್ಟ್‌ಗಳು, ಜಿಲ್ಲೆಯ ಗೇಟ್ ಮತ್ತು ಸ್ವಚ್ಛತೆ ಇವುಗಳಿಗೆ ಆದ್ಯತೆ ನೀಡುವುದು.
8. ಸ್ಕೌಟ್ ಮತ್ತು ಗೈಡ್‌ಗಳನ್ನು / ರೋವರ್ಸ್ /ರೇಂಜರ್ಸ್‌ಗಳನ್ನು ಕಾವಲು ಸಮಿತಿಗೆ ನೇಮಿಸುವುದು ಮತ್ತು ಜಿಲ್ಲೆಯ ತಂಡಗಳ ಸಾಮಾನುಗಳನ್ನು ಹಾಗು ಭದ್ರತಾ ವ್ಯವಸ್ಥೆಯನ್ನು ದಿನದ 24 ಗಂಟೆಗಳೂ ವ್ಯವಸ್ಥೆ ಮಾಡಿಕೊಳ್ಳುವುದು.
9. ದಿನಚರಿಯಂತೆ ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾವಹಿಸುವುದು.
10. ಜಾಂಬೋರೇಟ್ ಸಮಾಚಾರವನ್ನು ಸದಸ್ಯರಿಗೆ ತಿಳಿಸುವುದು.
11. ಜಾಂಬೊರೇಟ್‌ನಿಂದ ಹೊರಡುವ ಮೊದಲು ಜಾಂಬೋರೇಟ್ ಕ್ವಾರ್ಟರ್ ಮಾಸ್ಟರ್ ಮತ್ತು ಶಿಬಿರದ ನಾಯಕರಿಂದ ಬಿಡುಗಡೆ ಪತ್ರವನ್ನು ಪಡೆಯಬೇಕು.
12. ಜಾಂಬೊರೇಟ್ ಮುಖ್ಯಸ್ಥರು ತಮಗೆ ನೀಡುವ ಆದೇಶಗಳನ್ನು ಪಾಲಿಸುವಂತೆ ತಂಡದ ಸದಸ್ಯರಿಗೆ ಮಾರ್ಗದರ್ಶನ ಮಾಡಬೇಕು.
13. ಮಪ್ತಿಯಲ್ಲಿರುವಾಗ ತಪ್ಪದೆ ಜಾಂಬೊರೇಟ್ ಸ್ಕಾರ್ಫ್‌ನ್ನು ಕಡ್ಡಾಯವಾಗಿ ಧರಿಸಬೇಕು.
14. ತಂಡದ ಸದಸ್ಯರುಗಳು ಇತರೆ ಜಿಲ್ಲೆಗಳ ಚಟುವಟಿಕೆಗಳು, ಗ್ಯಾಡ್ಜೆಟ್

ತಯಾರಿಕೆ, ಪಯಾನಿಯರಿಂಗ್ ಪ್ರಾಜೆಕ್ಟ್‌ಗಳು, ಸ್ವಚ್ಛತೆ, ವೀಕ್ಷಣೆ ಮಾಡಿ ಅವರ ಅನುಭವ ಮತ್ತು ಕೌಶಲ್ಯಗಳನ್ನು ಕಲಿಯುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು.

**ಕಂಟಿನ್‌ಜೆಂಟ್ ಕಿಟ್** :-

ಕೆಳಕಂಡ ಸಾಮಗ್ರಿಗಳನ್ನು ಕಡ್ಡಾಯವಾಗಿ ತರಲೇಬೇಕು.

1) ಸಂಸ್ಥೆಯ ಧ್ವಜ
2) ಜಿಲ್ಲಾ ಧ್ವಜಗಳು – ಮೂರು
3) ಕಲರ್ ಪಾರ್ಟಿಗೆ ಅವಶ್ಯವಿರುವ ಸಾಮಗ್ರಿಗಳು
4) 24" X 12" ಅಳತೆ ಮತ್ತು 12" ಹಿಡಿಕೆಯ 3 ಫಲಕ ( ಜಿಲ್ಲೆಯ ಹೆಸರನ್ನು ಬಿಳಿ ಬಣ್ಣದ ಹಿನ್ನೆಲೆಯಲ್ಲಿ ಕೆಂಪು ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು. )
5) ಈ ಕೆಳಕಂಡ ಕಾರ್ಯಕ್ರಮಗಳಿಗೆ ಅವಶ್ಯವಿರುವ ಸಾಮಗ್ರಿಗಳು
   ಅ) ವಸ್ತು ಪ್ರದರ್ಶನ
   ಆ) ಸ್ಕಿಲ್ – ಓ – ರಾಮ
   ಇ) ಶಿಬಿರಾಗ್ನಿ
   ಈ) ಜನಪದನೃತ್ಯ
   ಉ) ಫಿಸಿಕಲ್ ಡಿಸ್‌ಪ್ಲೈ
   ಊ) ಜಿಲ್ಲಾ ದರ್ಶನ

ತಂಡದ ನಾಯಕರು ಜಿಲ್ಲಾ ಅಡುಗೆಮನೆ ವ್ಯವಸ್ಥೆ ಮಾಡಿಕೊಳ್ಳಬೇಕಾಗಿದ್ದು, ಅಡಿಗೆ ಸಾಮಗ್ರಿಗಳು, ನೀರಿಗೆ ಡ್ರಮ್‌ಗಳು, ಆಹಾರ ವಿತರಣೆಗೆ ಪಾತ್ರೆಗಳು ಮತ್ತು ಊಟ ಮಾಡಲು ಷಾಮಿಯಾನ ಇತ್ಯಾದಿಗಳನ್ನು ಜಾಂಬೋರೇಟ್ ಸಮಿತಿಯ ಸಹಕಾರದೊಂದಿಗೆ ವ್ಯವಸ್ಥೆ ಮಾಡಿಕೊಳ್ಳಬೇಕು.

**ಪೆಟ್ರೋಲ್ ಕಿಟ್** : -

1. ಪೆಟ್ರೋಲ್ ಧ್ವಜ
2. ಎರಡು ಬಕೆಟ್‌ಗಳು
3. ಲಾಟೀನ್‌ಗಳು
4. ಗ್ರೌಂಡ್ ಷೀಟ್
5. ಅಡಿಗೆ ಪಾತ್ರೆಗಳು

6. ಆಹಾರ ವಿತರಣೆಗೆ ಪಾತ್ರೆಗಳು
7. ಟೀ ಕೆಟಲ್
8. ಶಿಬಿರಕ್ಕೆ ಬೇಕಾದ ಸಾಮಗ್ರಿಗಳು
9. ಗ್ಯಾಡ್ಜೆಟ್ಸ್ ಮಾಡಲು ಬೇಕಾದ ಸಾಮಗ್ರಿಗಳು
10. ಪ್ರಥಮ ಚಿಕಿತ್ಸೆ ಪೆಟ್ಟಿಗೆ
11. ಸಂಗೀತ ಉಪಕರಣಗಳು

**ವೈಯಕ್ತಿಕ ಕಿಟ್** :-

ಭಾಗವಹಿಸುವವರು ಕೆಳಕಂಡ ವಸ್ತುಗಳನ್ನು ತರಬೇಕು

1. ರಕ್ ಸ್ಯಾಕ್
2. ಹಗುರ ಹಾಸಿಗೆ
3. ಪೂರ್ಣ ಪ್ರಮಾಣದ ಎರಡು ಜೊತೆ ಸಮವಸ್ತ್ರಗಳು
4. ಹಗುರವಾದ ಬೆಚ್ಚಗಿನ ಹಾಸಿಗೆ, ವುಲ್ಲನ್ ಸ್ವೆಟರ್
5. ವೈಯಕ್ತಿಕ ಸಾಮಗ್ರಿಗಳು, ಔಷಧಿಗಳು, ಬದಲಿ ಉಡುಪುಗಳು
6. ಊಟಕ್ಕೆ ಪಾತ್ರೆಗಳು – ಮಗ್, ಸ್ಪೂನ್ , ಗ್ಲಾಸ್ , ತಟ್ಟೆ
7. ಬ್ಯಾಟರಿ
8. ನೀರಿನ ಬಾಟಲ್
9. ಇತರೆ ಅವಶ್ಯಕ ಸಾಮಗ್ರಿಗಳು

**ಆಗಮನ ಮತ್ತು ನಿರ್ಗಮನ** :-

17ನೇ ಆಗಸ್ಟ್ 2014 ರಂದು ಪೂರ್ವಾಹ್ನದ ಒಳಗಾಗಿ ಕಂಟಿನ್‌ಜೆಂಟ್‌ಗಳು ಜಾಂಬೊರೇಟ್ ಸ್ಥಳದಲ್ಲಿ ಹಾಜರಿರಬೇಕು. 23ನೇ ಆಗಸ್ಟ್ 2014 ರಂದು ಊಟದ ನಂತರ "ಏನೂ ಬಾಕಿ ಇಲ್ಲ" ಎಂಬ ಪ್ರಮಾಣಪತ್ರ ಜಾಂಬೊರೇಟ್‌ನ ಶಿಬಿರ ನಾಯಕರಿಂದ ಪಡೆದು ನಂತರ ಬಿಡುಗಡೆ ಮಾಡಲಾಗುವುದು.

**ಅಡಿಗೆಮನೆ ಮತ್ತು ಅಡಿಗೆ ಮಾಡುವ ವ್ಯವಸ್ಥೆ** : -

33 ಅಡಿಗೆ ಮನೆಗಳನ್ನು ವ್ಯವಸ್ಥೆ ಮಾಡಲಾಗಿರುತ್ತದೆ. ಗುಡಾರಗಳಲ್ಲಿ ಅಡುಗೆ ಮಾಡುವುದನ್ನು ನಿಷೇಧಿಸಿದೆ. ಸ್ಕೌಟ್ ಮತ್ತು ಗೈಡ್ ವಿಭಾಗಗಳು ಒಂದೇ ಅಡುಗೆಮನೆ ಮಾಡಿಕೊಳ್ಳುವುದು ಉತ್ತಮ. ಪ್ಯಾಟ್ರೋಲ್ ಕುಕಿಂಗ್ ಮಾಡಿಕೊಳ್ಳುವುದು ಜಿಲ್ಲೆಗಳಿಗೆ ಹೆಚ್ಚಿನ ಅಂಕ ಪಡೆಯಲು ಮಾರ್ಗಸೂಚಿ.

**ನೊಂದಾವಣೆ ಮತ್ತು ಹಂಚಿಕೆ** : -

ಎಲ್ಲಾ ಕಂಟಿನ್‌ಜೆಂಟ್‌ಗಳು, ಅರ್ಜಿಯೊಂದಿಗೆ ನೊಂದಾವಣೆ ಮಾಡಿಕೊಳ್ಳಬೇಕು. ನೊಂದಾವಣೆ ಮಾಡಿಸಲು ಕಡೆಯ ದಿನಾಂಕ:25-07-2014. ಯಾವುದೇ ಕಾರಣದಿಂದ ಸ್ಥಳದಲ್ಲಿ ನೊಂದಾಯಿಸಿಕೊಳ್ಳಲಾಗುವುದಿಲ್ಲ. ಜಾಂಬೋರೇಟ್ ಸ್ಥಳಕ್ಕೆ ಕಂಟಿನ್‌ಜೆಂಟ್ ತಲುಪಿದ ಕೂಡಲೇ ನೊಂದಾವಣೆ ವಿವರಗಳನ್ನು ನೊಂದಣಿ ಕಛೇರಿಯಲ್ಲಿ ನೀಡತಕ್ಕದ್ದು. ಕಂಟಿನ್‌ಜೆಂಟ್‌ಗಳಿಗೆ ಗುಡಾರ, ಜಾಂಬೋರೇಟ್ ಸಾಮಗ್ರಿಗಳನ್ನು ನೀಡಲಾಗುವುದು.

**ಅಡ್ವಾನ್ಸ್ ಪಾರ್ಟಿ** :-

ಕಂಟಿನ್‌ಜೆಂಟ್‌ಗಳು ತಮ್ಮ ಜಿಲ್ಲೆಯ ಕ್ವಾರ್ಟ್‌ರ್ ಮಾಸ್ಟರ್ ಮತ್ತು ಅವರ ತಂಡವನ್ನು ಮುಂಗಡ ಕಳಿಸಿ ಶಿಬಿರದಲ್ಲಿ ನಿಗದಿಯಾದ ಸ್ಥಳವನ್ನು ಪಡೆಯುವುದು. ಅವರುಗಳು ಕನಿಷ್ಠ ಒಂದು ದಿನ ಮುಂಚಿತವಾಗಿ ಅಂದರೆ 15 ಅಥವಾ 16ನೇ ಆಗಸ್ಟ್ 2014ರಂದು ಜಾಂಬೋರೇಟ್ ಕಛೇರಿಯಲ್ಲಿ ವಿವರವಾದ ಮಾಹಿತಿ ಪಡೆಯಬೇಕು.

**ಅಂಚೆ ಕಛೇರಿ** :-

ಜಾಂಬೋರೇಟ್ ಸ್ಥಳದಲ್ಲಿ ಜಾಂಬೋರೇಟ್ ಅಂಚೆ ಕಚೇರಿಯು 18-08-2014 ರಿಂದ ಕಾರ್ಯನಿರ್ವಹಿಸುತ್ತದೆ.

**ದೂರವಾಣಿ** :-

ಐಎಸ್‌ಡಿ/ಎಸ್‌ಟಿಡಿ/ಲೋಕಲ್ ದೂರವಾಣಿ ಸೇವೆಯನ್ನು ಮೊಬೈಲ್ ಚಾರ್ಜ್‌ರ್‌ಗಳನ್ನು ಜಾಂಬೊರೇಟ್ ಸ್ಥಳದಲ್ಲಿ ವ್ಯವಸ್ಥೆಮಾಡಲಾಗುವುದು.

**ಅಡಿಗೆ ಪದಾರ್ಥಗಳು** :-

ಕರ್ನಾಟಕ ಸರ್ಕಾರದ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯವರು ತಮ್ಮ ಮಳಿಗೆಗಳನ್ನು ತೆರೆದು ಅಕ್ಕಿ, ಮೈದಾ, ಎಣ್ಣೆ, ಸಕ್ಕರೆ ಹಾಗೂ ಇತರೆ ಅಡುಗೆಗೆ ಬೇಕಾಗುವ ಪದಾರ್ಥಗಳನ್ನು ಸರಬರಾಜು ಮಾಡುತ್ತಾರೆ. ತರಕಾರಿ, ಹಾಲು, ಮೊಟ್ಟೆ, ಹಣ್ಣು-ಹಂಪಲು, ಸೌದೆಗಳನ್ನು ಕೂಡ ಜಾಂಬೋರೇಟ್‌ಸ್ಥಳದಲ್ಲಿ ದೊರೆಯಲು ವ್ಯವಸ್ಥೆ ಮಾಡಲಾಗಿದೆ. ಗ್ಯಾಸ್ ಸಿಲಿಂಡರ್‌ಗಳ ವ್ಯವಸ್ಥೆ ಕೂಡ ಗ್ಯಾಸ್ ಏಜೆನ್ಸಿಯವರು ಸರಬರಾಜು ಮಾಡಲು ಒಪ್ಪಿರುತ್ತಾರೆ.

**ಜಾಂಬೋ ಮಾಲ್** :-
ಮಾರ್ಕೆಟ್ ಜೊತೆಗೆ ಷಾಪಿಂಗ್ ಕೇಂದ್ರವು ಇರುತ್ತದೆ. ಅಲ್ಲಿ ಉಪಹಾರ, ವಿವಿಧ ಅವಶ್ಯ ಸಾಮಗ್ರಿಗಳು , ಬಟ್ಟೆ , ಇತ್ಯಾದಿ ವಸ್ತುಗಳು ದೊರೆಯುತ್ತದೆ.

**ಅಗ್ನಿ ಶಾಮಕ ವ್ಯವಸ್ಥೆ** :-
ಜಾಂಬೋರೇಟ್ ಸ್ಥಳದಲ್ಲಿ ರಾಜ್ಯ ಅಗ್ನಿ ಶಾಮಕ ಸಂಸ್ಥೆಯವರು ಯಾವುದೇ ತುರ್ತುಪರಿಸ್ಥಿತಿಯನ್ನು ನಿಭಾಯಿಸಲು ಸಿದ್ಧರಿರುತ್ತಾರೆ.

**ಆಸ್ಪತ್ರೆ** :-
ಜಾಂಬೋರೇಟ್ ಸ್ಥಳದಲ್ಲಿ "ಜಾಮ್ ಆಸ್ಪತ್ರೆ " ವ್ಯವಸ್ಥೆ ಮಾಡಲಾಗಿದೆ. ಅನುಭವಿ ವೈದ್ಯರು , ಕಾಂಪೌಂಡರುಗಳು , ಶುಶ್ರೂಷೆಕರು ದಿನವಿಡಿ ಸೇವೆಗೆ ಸಿದ್ಧರಿರುತ್ತಾರೆ. ಸಾಹಸಮಯ ಚಟುವಟಿಕೆಗಳ ಸ್ಥಳ ಮತ್ತು ಇತರೆ ಮುಖ್ಯ ಸ್ಥಳಗಳಲ್ಲಿ ಪ್ರಥಮ ಚಿಕಿತ್ಸೆ ವ್ಯವಸ್ಥೆ ಮಾಡಲಾಗಿದೆ .

**ಕಳೆದ ವಸ್ತುಗಳ ವಿಭಾಗ** :-
ಕಳೆದ ವಸ್ತುಗಳು ಸಿಕ್ಕವರು ಕಂಟಿನ್‌ಜೆಂಟ್ ನಾಯಕರ ಮೂಲಕ ಜಾಂಬೋರೇಟ್ ಕಚೇರಿಯಲ್ಲಿ ಸೂಕ್ತ ವಿವರದೊಂದಿಗೆ ನೀಡಬೇಕಾಗಿ ಕೋರಿದೆ.

**ಸಾಮಗ್ರಿ ಸೇವಾ ಕೇಂದ್ರ** :-
ಸ್ಕೌಟ್ – ಗೈಡ್ ಸಾಮಗ್ರಿಗಳು ಹಾಗೂ ಪುಸ್ತಕಗಳು , ಪದಕಗಳು ಮತ್ತು ಸ್ಮರಣಿಕೆಗಳ ಸೇವಾ ಕೇಂದ್ರವನ್ನು ರಾಜ್ಯ ಕೇಂದ್ರ ಕಚೇರಿಯಿಂದ ಮಾರಾಟಕ್ಕೆ ಏರ್ಪಡಿಸಲಾಗಿದೆ.

**ಬಂದೋಬಸ್ತ್ ವ್ಯವಸ್ಥೆ** :-
ತಮ್ಮ ತಮ್ಮ ವಸ್ತುಗಳ ಬಂದೋಬಸ್ತು ಬಗ್ಗೆ ಭಾಗವಹಿಸುವವರು ಮತ್ತು ಕಂಟಿನ್‌ಜೆಂಟ್ ನಾಯಕರುಗಳದ್ದು. ಆದುದರಿಂದ ಕಂಟಿನ್‌ಜೆಂಟ್ ನಾಯಕರು ಇದಕ್ಕೆ ಸ್ಕೌಟ್ಸ್/ ಗೈಡ್ಸ್/ ರೋವರ್ಸ್/ ರೇಂಜರ್ಸ್ ದಿನಚರಿಯಂತೆ ತಮ್ಮ ವಿಭಾಗದಲ್ಲಿ ವ್ಯವಸ್ಥೆ ಮಾಡುವುದು. ಪ್ರತಿದಿನ ವಿವಿಧ ಸಿಬ್ಬಂದಿಗಳು, ಹೊರಗಡೆ , ಕೆಲಸಗಾರರು, ಗುತ್ತಿಗೆದಾರರು, ಇಲಾಖೆಯವರು ಶಿಬಿರದಲ್ಲಿ ಕಾರ್ಯನಿರ್ವಹಿಸುತ್ತಾರೆ. ಆದುದರಿಂದ ದಯಮಾಡಿ ನಿಮ್ಮ ವಿಭಾಗದಲ್ಲಿ ಸೂಕ್ತವಾಧ ಬಂದೋಬಸ್ತು ಮಾಡಿಕೊಳ್ಳಬೇಕಾಗಿ ವಿನಂತಿ.

**ಕಾರ್ಯಕ್ರಮಗಳು** : -

ಜಾಂಬೋರೇಟ್‌ನಲ್ಲಿ ವೈವಿದ್ಯಮಯ ಚಟುವಟಿಕೆಗಳು, ಮನರಂಜನೆ , ಸಂತೋಷ ಹಾಗೂ ಮುದ ನೀಡುವ ಸ್ಕೌಟ್ – ಗೈಡ್ ಚಟುವಟಿಕೆಗಳಿರುತ್ತದೆ. ಇವು ಸ್ಕೌಟಿಂಗ್ / ಗೈಡಿಂಗ್‌ನ ಮೂಲ ತತ್ವಗಳ ಆದಾರದ ಮೇಲೆ ರಚನೆಮಾಡಲಾಗಿದೆ. ಹೊರಸಂಚಾರ, ಸ್ಕಿಲ್ – ಓ – ರಾಮ (ಕರ ಕೌಶಲತೆ) ಸಮುದಾಯ ಅಭಿವೃದ್ಧಿ ಮತ್ತು ಸೇವೆ, ಸಾಹಸಮಯ ಚಟುವಟಿಕೆಗಳು.

**ವಿಭಾಗವಾರು ಗುಂಪು ಚಟುವಟಿಕೆಗಳು :- (ಜಿಲ್ಲಾ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸಲು)**

- ಜಿಲ್ಲಾ ಗೇಟ್
- ಶಿಬಿರಾಗ್ನಿ
- ಕ್ಯಾಂಪ್ ಕ್ರಾಫ್ಟ್
- ಅಗ್ರಗಾಮಿ ಯೋಜನೆಗಳು

ಈ ಚಟುವಟಿಕೆಗಳನ್ನು ವಿಭಾಗವಾರು ತೀರ್ಪುಗಾರರು ನೋಡಿ ತೀರ್ಪು ಕೊಡುತ್ತಾರೆ.

**ಜಂಟಿ ಚಟುವಟಿಕೆಗಳು (ಸ್ಕೌಟ್ಸ್ ಮತ್ತು ಗೈಡ್ಸ್)**

ಕೆಳಕಂಡ ಚಟುವಟಿಕೆಗಳನ್ನು ಎರಡೂ ವಿಭಾಗಗಳು ಒಟ್ಟಿಗೆ ಸೇರಿ ಮಾಡುವುದು.

1. ಕಲರ್ ಪಾರ್ಟಿ
2. ಪಥ ಸಂಚಲನ
3. ಜಾನಪದ ನೃತ್ಯ
4. ಶಾರೀರಿಕ ವ್ಯಾಯಾಮ ಪ್ರದರ್ಶನ
5. ವಸ್ತು ಪ್ರದರ್ಶನ
6. ಬ್ಯಾಂಡ್ ಪ್ರದರ್ಶನ
7. ಸಾಂಸ್ಕೃತಿಕ ಪ್ರದರ್ಶನ
8. ಜಿಲ್ಲಾ ದರ್ಶನ
9. ಆಹ್ಲಾದಕರ ಆಟಗಳು
10. ಅಲಂಕಾರ ವಿಕಾರ

**ಸೂಚನೆ** :-

1. ಗುಂಪು ಚಟುವಟಿಕೆಗಳನ್ನು ರಾಜ್ಯ ಮಟ್ಟದ ನಾಯಕರು ಮೌಲ್ಯಮಾಪನ ಮಾಡುತ್ತಾರೆ.
2. ಗ್ರೇಡ್ ಪ್ರಮಾಣದ ಪತ್ರ ಜೊತೆಗೆ ಪೆನೆಂಟ್‌ನ್ನು ಜಿಲ್ಲಾ ಸಂಸ್ಥೆಗಳಿಗೆ ಅವರು ಪಡದ ಗ್ರೇಡ್ ಅನುಸಾರವಾಗಿ ನೀಡಲಾಗುವುದು.

**ಜಾಂಬೋರೇಟ್ ಅವಾರ್ಡ್ ಚಟುವಟಿಕೆಗಳು** :-

ಜಾಂಬೋರೇಟ್ ಅವಾರ್ಡ್ ಚಟುವಟಿಕೆಗಳ ಕಿರು ಪುಸ್ತಕವನ್ನು ನೊಂದಾವಣಿ

ಸಂದರ್ಭದಲ್ಲಿ ನೀಡಲಾಗುವುದು. ಚಟುವಟಿಕೆ ಕೇಂದ್ರಗಳಲ್ಲಿ ವಿಶೇಷ ರಬ್ಬರ್ ಮೊಹರನ್ನು ಪ್ರತಿ ಚಟುವಟಿಕೆಗಳನ್ನು ಪೂರ್ಣಗೊಳಿಸಿರುವ ಸ್ಕೌಟ್ /ಗೈಡ್‌ಗಳ ಕಾರ್ಡ್‌ಗಳಿಗೆ ಮುದ್ರೆ ಹಾಕಲಾಗುವುದು. ಜಾಂಬೋರೇಟ್ ಅವಾರ್ಡ್ ಚಟುವಟಿಕೆಗಳು ಮುಗಿದ ನಂತರ ಕಾರ್ಡ್‌ನ್ನು ಉಪ ಶಿಬಿರ ನಾಯಕರಿಗೆ ನೀಡಿ, ಪರೀಕ್ಷಿಸಿ, ಜಾಂಬೋರೇಟ್ ಅವಾರ್ಡ್‌ನ್ನು ಕಂಟಿನ್‌ಜೆಂಟ್ ನಾಯಕರಿಗೆ ನೀಡಲಾಗುವುದು.

<u>ಜಿಲ್ಲಾ ಮಟ್ಟದ ವಿಭಾಗೀಯ ಚಟುವಟಿಕೆಗಳು</u> : -

ಪಥಸಂಚಲನ (ಸ್ಪರ್ಧೆ) ನಾಯಕರು ಸೇರಿ 32 ಸದಸ್ಯರು ಇದರಲ್ಲಿ ಭಾಗವಹಿಸಬಹುದು. ಈ ತಂಡವು 3 ಸಾಲುಗಳಲ್ಲಿ ಚಲಿಸಬೇಕು. ಸೆಲ್ಯೂಟ್, ಕಮಾಂಡ್, ಸ್ಮಾರ್ಟ್‌ನೆಸ್, ನಾಯಕನ ಸ್ಥಿರತೆ ಮತ್ತು ಸರಿಯಾದ ನಡೆಗಳನು ವೀಕ್ಷಿಸಲಾಗುವುದು.

| | |
|---|---|
| ಫಲಕ ಹಿಡಿದಿರುವವರು | - 1 |
| ನಾಯಕ | - 1 |
| ಸ್ಕೌಟ್ / ಗೈಡ್‌ಗಳು | - 30 |

<u>ಜಿಲ್ಲಾದ್ವಾರ</u> :- ಪ್ರತಿಯೊಂದು ಜಿಲ್ಲೆಯು ಬೇರೆ ಬೇರೆಯಾಗಿ ಜಿಲ್ಲಾ ದ್ವಾರಗಳನ್ನು ತಯಾರಿಸಬೇಕು. ಇದಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಳ್ಳುವುದು ಜಿಲ್ಲೆಯ ಜವಾಬ್ದಾರಿಯಾಗಿರುತ್ತದೆ. ಪ್ರಮಾಣಕ್ಕೆ ಅನುಗುಣವಾಗಿ, ಕೌಶಲ್ಯ , ನೋಟ, ಕಲ್ಪನೆ , ಉಪಯೋಗಿಸಿದ ಸಾಮಗ್ರಿ ಮತ್ತು ವಿಶೇಷತೆಯನ್ನು ಪರಿಗಣಿಸಲಾಗುತ್ತದೆ.

<u>ಶಿಬಿರದ ಕ್ರಾಫ್ಟ್</u> :-

ಪ್ರತಿ ದಿನ ಶಿಬಿರದ ತಪಾಸಣೆಯನ್ನು ಉಪ ಶಿಬಿರದ ನಾಯಕರು ವ್ಯವಸ್ಥೆಮಾಡುತ್ತಾರೆ. ಸಮವಸ್ತ್ರ, ಗುಡಾರ ಮತ್ತು ಪರಿಸರ , ಗ್ಯಾಡ್ಜೆಟ್ಸ್, ಅಡುಗೆ ಮನೆ ಮತ್ತು ಪಾತ್ರೆಗಳ ಶುಚಿತ್ವ , ಓರಣವನ್ನು ವೀಕ್ಷಿಸಿ ತೀರ್ಮಾನ ಮಾಡುತ್ತಾರೆ.

<u>ಬ್ಯಾಂಡ್</u> :-

ಪ್ರತಿ ವಿಭಾಗದವರು ಒಂದೊಂದು ಜಿಲ್ಲಾ ಕಂಟಿನ್‌ಜೆಂಟ್ ಬ್ಯಾಂಡ್ ತರಲು ಅವಕಾಶವಿದೆ. ಒಬ್ಬ ವಯಸ್ಕ ನಾಯಕ ಮಾತ್ರ ಬ್ಯಾಂಡ್ ಪಾರ್ಟಿಯಲ್ಲಿ ಪಾಲ್ಗೊಳ್ಳಲು ಅವಕಾಶವಿದೆ. ಬ್ಯಾಂಡ್ ಪಾರ್ಟಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಮನಾಗಿ ಇದ್ದರೆ ಸಮ ಅಂಕಗಳನ್ನು ಎರಡೂ ಕಡೆ ನೀಡಲಾಗುವುದು. ಬ್ಯಾಂಡ್ ಪಾರ್ಟಿ ಸ್ಕೌಟ್ / ಗೈಡ್ ಉಡುಪನ್ನು ಧರಿಸಬೇಕು.

**ಶಿಬಿರಾಗ್ನಿ** :-
ಉಪಶಿಬಿರಗಳಲ್ಲಿ ವಿಭಾಗವಾರು ಶಿಬಿರಾಗ್ನಿಯನ್ನು ತುಲನೆ ಮಾಡಲಾಗುವುದು.
ವಿಷಯ :- ಸಾಂಪ್ರದಾಯಕ, ಪಾತ್ರ , ಶೈಲಿ , ವಸ್ತ್ರಾಲಂಕಾರ , ಮೇಕಪ್ , ವಾದ್ಯಗಳು ಅಥವಾ ಉಪಯೋಗಿಸಿದ ವಸ್ತುಗಳನ್ನು ನೋಡಿ ತೀರ್ಮಾನ ತೆಗೆದುಕೊಳ್ಳಲಾಗುವುದು. ವಯಸ್ಕ ನಾಯಕರು ಇದರಲ್ಲಿ ಭಾಗವಹಿಸುವ ಹಾಗಿಲ್ಲ. ಸಮಯ ಗರಿಷ್ಠ 4 ನಿಮಿಷ.

**ಶಾರೀರಿಕ ವ್ಯಾಯಾಮ ಪ್ರದರ್ಶನ** :-
ಜಂಟಿಯಾಗಿ ಅಥವಾ ವಿಭಾಗವಾರು ಪರಿಶೀಲನೆ ಮಾಡಲಾಗುವುದು. 24 ಜನ ಭಾಗವಹಿಸಬೇಕು. ವಯಸ್ಕ ನಾಯಕರು ಭಾಗವಹಿಸುವ ಹಾಗಿಲ್ಲ. ಆದರೆ ಬ್ಯಾಂಡ್ ಅಥವಾ ಸಂಗೀತ ನುಡಿಸಲು ಸಹಾಯ ನೀಡಬಹುದು. ಫಿಜಿಕಲ್ ಡಿಸ್‌ಪ್ಲೇ ವಿಷಯ ಜಿಲ್ಲೆಯವರು ಆಯ್ಕೆ ಮಾಡಿಕೊಳ್ಳಬೇಕು. ಸಾಂಪ್ರದಾಯಕ, ಸಮತೋಲನ, ಕೌಶಲ್ಯ, ನಾಯಕತ್ವ ಮುಂತಾದವುಗಳನ್ನು ಗಮನಿಸಿ ತಪಾಸಣಾದಾರರು ತೀರ್ಪುನೀಡುತ್ತಾರೆ.

**ಗುಂಪು ಚಟುವಟಿಕೆಗಳು ( ಒಟ್ಟಾಗಿ )** :-
**ಜಾನಪದ ನೃತ್ಯ** :-
ಜಾನಪದ ನೃತ್ಯ ಹಬ್ಬ ಏರ್ಪಡಿಸಲಾಗಿದೆ. ಇದನ್ನು ಜಾಂಬೋರೇಟ್ ಮೈದಾನದಲ್ಲಿ ಏರ್ಪಡಿಸಲಾಗಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಒಟ್ಟಾಗಿ ಭಾಗವಹಿಸಬಹುದು. 12 ಮಂದಿ ಕನಿಷ್ಠ ಭಾಗವಹಿಸಬೇಕು. ವಯಸ್ಕರು ಭಾಗವಹಿಸುವಂತಿಲ್ಲ. ಆದರೆ ಬೇರೆ ವಿಧದಲ್ಲಿ ಸಹಾಯ ನೀಡಬಹುದು. ಈ ಜನಪದ ನೃತ್ಯ, ಸಂಪ್ರದಾಯಕ, ವಸ್ತ್ರವಿನ್ಯಾಸ, ಸಮತೋಲನ , ಇಂಪಾದ ಹಾಡು , ವಾದ್ಯ ಗೋಷ್ಠಿ ಮುಂತಾದವುಗಳನ್ನು ಪರಿಶೀಲಿಸಲಾಗುತ್ತದೆ. ಗರಿಷ್ಠ 4 ನಿಮಿಷ ಮಾತ್ರ . ಉತ್ತಮ ಜಾನಪದ ನೃತ್ಯವನ್ನು ಸಮಾರೋಪ ಸಮಾರಂಭದಲ್ಲಿ ಪ್ರದರ್ಶಿಸಲು ಅವಕಾಶ ಮಾಡಿಕೊಡಲಾಗುವುದು.

**ಕಲರ್ ಪಾರ್ಟಿ** :-
ಪ್ರತಿ ಜಿಲ್ಲೆಯು 5 ಮಕ್ಕಳ ಕಲರ್‌ಪಾರ್ಟಿ ತರಬಹುದು. ಅವರು ಸ್ಕೌಟ್ / ಗೈಡ್ ಸಮವಸ್ತ್ರ ಹೊಂದಿರಬೇಕು ಮತ್ತು ಬಿಳಿ ಗ್ಲೋವ್ಸ್ ಮತ್ತು ಅಂಕ್ಲೆಟ್ಸ್ ಹೊಂದಿರಬೇಕು. ಧ್ವಜದಾರನು ಚರ್ಮದ ಕ್ಯಾರಿಯರ್ ಬೆಲ್ಟ್ ಹೊಂದಿರಬೇಕು. ಕಲರ್ ಪಾರ್ಟಿ 3 ಸ್ಕೌಟ್ಸ್ 2 ಗೈಡ್ಸ್ ಅಥವಾ 3 ಗೈಡ್ಸ್ ಮತ್ತು 2 ಸ್ಕೌಟ್ಸ್ ಗಳನ್ನು ಹೊಂದಿರಬೇಕು.

ಮೊದಲನೇ ಸಾಲಿನಲ್ಲಿ ಇಬ್ಬರು, ಎಡ ಭಾಗಕ್ಕೆ ಸ್ಕೌಟ್ / ಗೈಡ್ ಧ್ವಜ ಹೊಂದಿರುವವ, ಬಲ ಭಾಗಕ್ಕೆ ರಾಷ್ಟ್ರೀಯ ಧ್ವಜ ಹೊಂದಿರುವವರು ಇರಬೇಕು. ಈ ಕೆಳಕಂಡ ಅಂಶಗಳನ್ನು ಗಮನಿಸಲಾಗುವುದು. ಧ್ವಜವನ್ನು ಹಿಡಿದಿರುವ ರೀತಿ, ಲೀಡರ್‌ನ ಸ್ಥಳ , ಮಾರ್ಚಿಂಗ್ , ಸೆಲ್ಯೂಟಿಂಗ್ , ಸಮವಸ್ತ್ರ , ನಾಯಕತ್ವ , ಸ್ಮಾರ್ಟ್‌ನೆಸ್, ಧ್ವಜವನ್ನು ತೆಗೆಯುವುದು ಮತ್ತು ಧ್ವಜವನ್ನು ಗ್ಯಾದರ್ ಮಾಡುವುದು.

**ಮಾರ್ಚ್ ಫಾಸ್ಟ್** :- ಉದ್ಘಾಟನೆ ಮತ್ತು ಸಮಾರೋಪ ಸಮಾರಂಭಗಳಿಗೆ ಮಾರ್ಚ್ ಫಾಸ್ಟ್ ತಂಡಗಳು ಕೆಳಕಂಡ ರೀತಿ ಇರಬೇಕು.

| | |
|---|---|
| ಫಲಕ ಹಿಡಿದವರು | 01 |
| ಕಲರ್ ಪಾರ್ಟಿ | 05 |
| ನಾಯಕ ಸ್ಕೌಟ್/ಗೈಡ್ | 01 |
| ಸ್ಕೌಟ್ಸ್ | 15 |
| ಗೈಡ್ಸ್ | 15 |
| | 37 |

**ಪಥಚಲನ** (Route Merch):-

ಜಾಂಬೋರೇಟ್‌ನ ಅಂಗವಾಗಿ ಪಥಸಂಚಲನ ಏರ್ಪಡಿಸಲಾಗಿದೆ. ಎಲ್ಲರೂ ಭಾಗವಹಿಸಬೇಕು. ಎಲ್ಲರೂ ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರ ಧರಿಸಿರಬೇಕು. ಘೋಷಣಾ ಫಲಕಗಳು, ಜಿಲ್ಲಾ ಫಲಕ, ಜಿಲ್ಲೆಗಳ ಬ್ಯಾನರ್‌ಗಳು, ( ಸಾಮಾಜಿಕ ಪಿಡುಗುಗಳ ಬಗ್ಗೆ ) ತೆಗೆದು ಕೊಂಡಿರಬೇಕು.

**<u>ವಸ್ತು ಪ್ರದರ್ಶನ</u>** :-

ವಸ್ತು ಪ್ರದರ್ಶನಕ್ಕೆ ಪ್ರತ್ಯೇಕ ಸ್ಥಳವನ್ನು ನಿಗದಿಪಡಿಸಿದೆ. ವಸ್ತು ಪ್ರದರ್ಶನದಲ್ಲಿ ಮಾದರಿಗಳು, ಕರಕುಶಲ ವಸ್ತುಗಳು, ಕಂಪ್ಯೂಟರ್ ಮತ್ತು ಅನೇಕ ರೀತಿಯ ಸ್ಕೌಟ್ / ಗೈಡ್‌ಗಳು ತಯಾರಿಸಿದ ವಸ್ತುಗಳನ್ನು ಪ್ರದರ್ಶಿಸಬಹುದು. ವಿದ್ಯುತ್ ಸಂಪರ್ಕ ಒದಗಿಸುವುದು.

**<u>ಪೇಜೆಂಟ್ ಷೋ (ಸಾಂಸ್ಕೃತಿಕ ಪ್ರದರ್ಶನ)</u>** :-

ಜಿಲ್ಲೆಗಳು ಇದಕ್ಕೆ ಸಜ್ಜಾಗಿ ಬರಬೇಕು. ಈ ಪ್ರದರ್ಶನ ಅವರ ಜಿಲ್ಲೆಯ ಸಂಸ್ಕೃತಿ ಮತ್ತು ಪರಂಪರೆಯನ್ನು ತೋರಿಸಬೇಕು. ಸಮುದಾಯ ಅಭಿವೃದ್ಧಿ. ಚಟುವಟಿಕೆ. ಸಂಸ್ಕೃತಿ ಹಾಗು ಇತರೆ ಪ್ರದರ್ಶನವನ್ನು ನೀಡುವುದು. ಎಲ್ಲರೂ ಭಾಗವಹಿಸಬೇಕು. ಇಲ್ಲಿ

ಭಾವೈಕ್ಯತೆಯ ಬಗ್ಗೆ ವಿವರಣೆ, ಸಾಮಾಜಿಕ ಕರ್ತವ್ಯಗಳು ಹಾಗೂ ಬೆಳವಣಿಗೆಗಳು ಸಂಪ್ರದಾಯಕ ವಸ್ತ್ರ ವಿನ್ಯಾಸ, ಜೀವಕಳೆ, ವಿವರಣೆ, ಇವುಗಳನ್ನು ನೋಡಿ ಫಲಿತಾಂಶ ಪ್ರಕಟಿಸಲಾಗುವುದು. ಪ್ರತಿ ಜಿಲ್ಲೆಗೆ 3 ನಿಮಿಷ ಅವಧಿ ನೀಡಲಾಗುವುದು.

**ಪಯನಿರಿಂಗ್ ಪ್ರಾಜೆಕ್ಟ್** :-

ಯಾವುದಾದರೂ ಒಂದು ಉತ್ತಮ ಪಯನಿರಿಂಗ್ ಪ್ರಾಜೆಕ್ಟ್ ಪ್ರತಿ ಜಿಲ್ಲೆ ನೀಡಬೇಕು. ವಯಸ್ಕರು ಕೂಡ ಸಹಕರಿಸಬಹುದು. ಪ್ರಾಜೆಕ್ಟ್ ತಯಾರಿಸಲು 8 ಗಂಟೆ ನೀಡಲಾಗುವುದು. ಉಪಯುಕ್ತತೆ , ಗಂಟುಗಳ ನಿಖರತೆ , ಲ್ಯಾಷಿಂಗ್‌ಗಳ ನಿಖರತೆ , ಕೌಶಲ್ಯ , ಸ್ವಚ್ಛತೆ ಇವುಗಳನ್ನು ಗಮನಿಸಲಾಗುವುದು. ಇದಕ್ಕೆ ಅವಶ್ಯವಿರುವ ಸಾಮಗ್ರಿ ಪಡೆಯುವುದು ಜಿಲ್ಲೆಗಳ ಜವಬ್ದಾರಿಯಾಗಿರುತ್ತದೆ.

**ಯುವ ವೇದಿಕೆ** :-

ಇದರ ವಿವರಗಳನ್ನು ಜಾಂಬೋರೇಟ್ ಕೈಪಿಡಿಯಲ್ಲಿ ಪ್ರಕಟ ಪಡಿಸಲಾಗುತ್ತದೆ.

**ರಸ ಪ್ರಶ್ನೆ**:-

ಇದರ ವಿವರಗಳನ್ನು ಜಾಂಬೋರೇಟ್ ಕೈಪಿಡಿಯಲ್ಲಿ ಪ್ರಕಟ ಪಡಿಸಲಾಗುವುದು. ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶವನ್ನು ಮತ್ತು ತರಬೇತುದಾರರ ಸಮಾವೇಶವನ್ನು ಏರ್ಪಡಿಸಲಾಗುವುದು.

**ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಶಿಬಿರಾಗ್ನಿ** :-

ಜಾಂಬೋರೇಟ್‌ನ ಮೊದಲನೇಯ ದಿನ ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಗಳ ಶಿಬಿರಾಗ್ನಿ ಏರ್ಪಡಿಸಲಾಗಿದೆ. ಅದಕ್ಕೆ ಬೇಕಾದ ಸಿದ್ಧತೆಗಳು ಮಾಡಿಕೊಂಡು ಬರಬೇಕು

**ಅನುಮತಿ ಪತ್ರ** :-

ಅನಿವಾರ್ಯ ಸಂದರ್ಭಗಳಲ್ಲಿ ಜಾಂಬೋರೇಟ್‌ನಿಂದ ಹೊರಗಡೆ ಹೋಗಬೇಕಾದರೆ, ಜಾಂಬೋರೇಟ್ ಅಧಿಕಾರಿಗಳಿಂದ ಅನುಮತಿಯನ್ನು ಪಡೆಯಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ.

ಜಾಂಬೋರೇಟ್ ಚಟುವಟಿಕೆಗಳ ವಿವರಗಳು

# ಜಿಲ್ಲಾ ದರ್ಶನ-**District Expo**

## ಭಾಗ 1

**ಚಟುವಟಿಕೆ 1:**

ಜಿಲ್ಲಾ ವಿಶೇಷತೆಗಳು :

1. ಉಡಿಗೆ ತೊಡಿಗೆ- (ಗುಡ್ಡಗಾಡು ಜನಾಂಗದವರಿದ್ದರೆ, ಮೀನುಗಾರರು ಇತ್ಯಾದಿ)
2. ತಿನಿಸು – ತಯಾರಿಸಬಹುದು/ತರಬಹುದು
3. ಸಾಂಪ್ರದಾಯಿಕ ಅಲಂಕರಣ
4. ತಳಿರು ತೋರಣ - ರಂಗೋಲಿ
5. ಊರ ಹಬ್ಬದ ನೋಟ
6. ಜಾನಪದ – ಗೀತೆ/ಕಲೆ/ಸಾಹಿತ್ಯ/ನೃತ್ಯ/ಕಿರು ನಾಟಕ
7. ವಸ್ತು ಪ್ರದರ್ಶನ – ವಿಶೇಷ ವಸ್ತುಗಳು, ನಿಮ್ಮ ಜಿಲ್ಲೆಯ ಇತಿಹಾಸ ಪ್ರಸಿದ್ಧರು, ಸ್ವಾತಂತ್ರ್ಯ ಹೋರಾಟಗಾರರು/ಯಾವುದೇ ರಂಗದ ವಿಶೇಷ ಸಾಧಕರು – ಇವರುಗಳ ಭಾವಚಿತ್ರ ಒಂದೆರಡು ಸಾಲುಗಳ ಪರಿಚಯ
8. ನಿಮ್ಮ ಜಿಲ್ಲೆಯ ಸಂಕ್ಷಿಪ್ತ ಇತಿಹಾಸ
9. ನಿಮ್ಮ ಊರಿನ ಭೂಗೋಳ, ಜಿಲ್ಲಾ ನಕ್ಷೆ - ನದಿ ಗುಡ್ಡಬೆಟ್ಟ ಕಾಡು ಕೆರೆಕೊಳ, ವಿಶೇಷ ಮರ ಮತ್ತು ಪ್ರಾಣಿಗಳು
10. ಪ್ರೇಕ್ಷಣೀಯ ಸ್ಥಳಗಳು – ಜಿಲ್ಲಾ ಕೇಂದ್ರದಿಂದ ಹೇಗೆ ಹೋಗುವುದು ತಿಳಿಸಿ, ಕೈಗಾರಿಕೆ/ಕಂಪೆನಿಗಳಿದ್ದರೆ ನಮೂದಿಸಿ
11. ಕರಕೌಶಲ ವಸ್ತು ಪ್ರದರ್ಶಿಸಿ ಇಲ್ಲವೇ ಮಾಡಿ ತೋರಿಸಿ.

ನಿಮ್ಮ ಜಿಲ್ಲೆ ಕುರಿತಾದ ಚಿಕ್ಕಚಿಕ್ಕ ಜಿಲ್ಲಾ ಪರಿಚಯ ಪುಸ್ತಕಗಳಿವೆ. ಎ.ಎಸ್.ಓ.ಸಿಗಳು ಈ ಅಂಶಗಳನ್ನು ಸರಿಯಾಗಿ ಕೋಟಾ ನೀಡಿದ ಶಾಲೆಗಳಿಗೆ ಹಂಚಿ ಸಿದ್ಧಮಾಡಿಕೊಂಡು ಬರಲು ತಿಳಿಸುವುದು ಮಾರ್ಗದರ್ಶನ ನೀಡುವುದು

## ಭಾಗ 2

ನಿಮ್ಮ ಜಿಲ್ಲೆಯ ಸ್ಕೌಟಿಂಗ್-ಗೈಡಿಂಗ್ ಪ್ರದರ್ಶನ

1. ಡಿ.ಸಿ.ಸಿ, ಡಿ.ಸಿ.(ಸ್ಕೌ), ಡಿ.ಸಿ(ಗೈ) ಮತ್ತು ಡಿ.ಟಿ.ಸಿ, ಎ.ಡಿ.ಸಿ - ಕಾರ್ಯಕಾರಿ ಸಮಿತಿ ಅಧ್ಯಕ್ಷರು

2. ಎಲ್.ಟಿ, ಎ.ಎಲ್.ಟಿ

3. ಖಜಾಂಚಿ

4. ಕಾರ್ಯದರ್ಶಿ – ಜಂಟಿ ಕಾರ್ಯದರ್ಶಿ(ಸ್ಕೌ), ಜಂಟಿ ಕಾರ್ಯದರ್ಶಿ(ಗೈ) ಒಳಗೊಂಡ ಚಾರ್ಟ ಸಿದ್ಧಮಾಡಿ ಹಾಕಿ

ಇವರುಗಳ ಹೆಸರು ಪದನಾಮೆ ಎಲ್ಲರ ಪಾಸ್‌ಪೋರ್ಟ ಅಥವಾ ಸ್ಟಾಪ್ ಅಳತೆಯ ಭಾವಚಿತ್ರ ಸಿಕ್ಕರೆ ಅಂಟಿಸಿ.

ಸ್ಕೌಟ್- ಗೈಡ್ ಸದಸ್ಯರ ಸಂಖ್ಯಾಬಲ:

| ಸ್ಕೌಟ್ | ಬನ್ನೀಸ್ | ಗೈಡ್ |
|---|---|---|
| ಕಬ್ಸ್ | - | ಬುಲ್‌ಬುಲ್ಸ್ |
| ಸ್ಕೌಟ್ | - | ಗೈಡ್ಸ್ |
| ರೋವರ್ಸ್ | - | ರೇಂಜರ್ಸ್ |

| | ಬಿ.ಸಿ | ಎ.ಸಿ | ಹೆಚ್.ಡಬ್ಲ್ಯು.ಬಿ | ಪ್ರೀ– ಎ.ಎಲ್.ಟಿ | ಎ.ಎಲ್.ಟಿ | ಎಲ್.ಟಿ |
|---|---|---|---|---|---|---|
| ಕಬ್ ಮಾಸ್ಟರ್ | | | | | | |
| ಪ್ಲಾಕ್ ಲೀಡರ್ಸ್ | | | | | | |
| ಸ್ಕೌಟ್ ಮಾಸ್ಟರ್ಸ್ | | | | | | |
| ಗೈಡ್ ಕ್ಯಾಪ್ಟನ್ಸ್ | | | | | | |
| ರೋವರ್ ಲೀಡರ್ಸ್ | | | | | | |
| ರೇಂಜರ್ ಲೀಡರ್ಸ್ | | | | | | |
| ಜಿಲ್ಲಾ ಕೇಂದ್ರದ ವಿಳಾಸ | | | | | | |
| ಜಿಲ್ಲಾ ತರಬೇತಿ ಕೇಂದ್ರದ ವಿಳಾಸ | | | | | | |

- ಕರಪತ್ರ, ನಕ್ಷೆಗಳಿದ್ದರೆ ಪ್ರದರ್ಶಿಸಿ
- ಜಿಲ್ಲೆಯಲ್ಲಿ ವಾರ್ತಾಪತ್ರಿಕೆ ಪ್ರಕಟಣೆಗಳಿದ್ದರೆ ಪ್ರದರ್ಶಿಸಿ

2ನೇ ಭಾಗವನ್ನು ಎ.ಎಸ್.ಓ.ಸಿ/ಡಿ.ಓ.ಸಿ/ಡಿ.ಓ ಕಾರ್ಯದರ್ಶಿ ಮತ್ತು ಇತರೇ ಸದಸ್ಯರ ಸಹಾಯದಿಂದ ರಚಿಸುವುದು.

| ಜಿಲ್ಲಾ ವಿಶೇಷತೆ: (ಇತ್ತೀಚಿನ 5 ವರ್ಷಗಳಲ್ಲಿ) | ಸಂಖ್ಯೆ |
|---|---|
| ರಾಜ್ಯ ಪುರಸ್ಕಾರ ಸಂಖ್ಯೆ | - |
| ರಾಷ್ಟ್ರಪತಿ ಪುರಸ್ಕಾರ ಸಂಖ್ಯೆ | - |
| ಜಿಲ್ಲಾ ರ್‍ಯಾಲಿಯಲ್ಲಿ ಭಾಗವಹಿಸಿದವರ ದಳ ಸಂಖ್ಯೆ | - |
| ರಾಜ್ಯ ಜ್ಯಾಂಬುರೇಟ್‌ನಲ್ಲಿ ಭಾಗವಹಿಸಿದವರ ದಳ ಸಂಖ್ಯೆ | - |
| ಜಿಲ್ಲೆ ಪಡೆದ ಪುರಸ್ಕಾರ | - |
| ರಾಷ್ಟ್ರ ಮಟ್ಟಕ್ಕೆ ಪ್ರತಿನಿಧಿಸಿದವರು | - |
| ವಿದೇಶ ಕಾರ್ಯಕ್ರಮ | — |

## ಇತರೆ ಸಾಧನೆ ಮತ್ತು ಸಾಧಕರು

2ನೇ ಭಾಗವನ್ನು ಎ.ಎಸ್.ಓ.ಸಿ/ಡಿ.ಓ.ಸಿ/ಡಿ.ಓಗಳು ಕಾರ್ಯದರ್ಶಿ ಹಾಗು ಪದಾಧಿಕಾರಿಗಳ ಹಿರಿಯ ಸ್ಕೌಟರ್ಸ್‌ಗಳ ಸಹಾಯದಿಂದ ಆಕರ್ಷಕ ರೀತಿಯಲ್ಲಿ ಸ್ಕೌಟ್ ಗೈಡ್ ಪಕ್ಷಿನೋಟ ತಯಾರಿಸತಕ್ಕದ್ದು.

ಈ ಕಾರ್ಯಕ್ರಮ ಒಂದು ಸ್ಪರ್ಧೆ. ಇದಕ್ಕೆ ಪ್ರತ್ಯೇಕ ತೀರ್ಪುಗಾರರ ತಂಡವನ್ನು ರಚಿಸಲಾಗುವುದು. ಉತ್ತಮ ಪ್ರದರ್ಶನ ನೀಡಿದ ಜಿಲ್ಲೆಗೆ ಪ್ರತ್ಯೇಕ ಚಿತ್ತಿಫಲಕ ನೀಡಲಾಗುವುದು.

**ಚಟುವಟಿಕೆ 2: ವಿನೋದ ಆಟಗಳು – Fun Game**

| | | |
|---|---|---|
| ಚೆಂಡು-ಬಕೆಟ್ | - | Ball & the Bucket |
| ಕಣ್ಣುಮುಚ್ಚಾಟ | - | Blind fold game |
| ಬಾಗುಮೊಳ ರಿಂಗ್ | - | Pegs & the Ring |
| ಬೆಲೂನ್ ನಡಿಗೆ | - | Baloon Walk |
| ಮೂರಕಾಲಿನ ಓಟ | - | 3 Legged Race |
| ಚೀಲದಲ್ಲಿ ಓಟ | - | Sac Race |
| ಕಪ್ಪೆ ಕುಪ್ಪಳಿಸುವುದು | - | Frog hopping |
| ಹಗ್ಗ ಜಗ್ಗಾಟ | - | Tug of war |
| ಬಾಲ ಎಳೆಯುವುದು | - | Pulling the Tail |

**ಚಟುವಟಿಕೆ 3:** ಯುವ ಧ್ವನಿ –**Youth Voice**

ಚರ್ಚೆ - ನಿರ್ಧಾರ – DISCUS – DECIDE

ಅವರ ವಯೋಮಾನಕೆ ತಕ್ಕಂತೆ ಚರ್ಚಿಸಬಹುದಾದ ವಿಷಯಗಳನ್ನು ನೀಡಲಾಗುವುದು.

ಸೂಚನೆ:

1. 5 ಸ್ತ್ರೀ/ಗೈ ಗುಂಪಾಗಿ ವೃತ್ತಮಾಡಿ ಕುಳಿತುಕೊಳ್ಳಿ 2 ನಿಮಿಷ
   5 Member make a group sit in circle

2. ಅಧ್ಯಕ್ಷರು ಹಾಗು ಲೇಖಕರನ್ನು ಆಯ್ಕೆಮಾಡಿ 2 ನಿಮಿಷ
   Elect Chairman & Scribe (writer)

3. ನಿಮಗೆ ಬಂದಿರುವ ವಿಷಯ ಎರಡು ಮೂರು ಬಾರಿ ಓದಿ ಅರ್ಥಮಾಡಿಕೊಳ್ಳಿ 2 ನಿಮಿಷ
   Read the mater & understand the meaning

4. ಚರ್ಚೆ ಪ್ರಾರಂಭಿಸಿ 15 ನಿಮಿಷ
   Start Discussion

5. ಈಗ ನಿಮ್ಮ ನಿರ್ಧಾರಗಳನ್ನು ಕೊಟ್ಟಿರುವ ಪುಟದಲ್ಲಿ ಬರಿಯಿರಿ 5 ನಿಮಿಷ
   Write your Discussion on the given sheet

6. ಪುಟ ತಿರುಗಿಸಿ ನಿಮ್ಮ ನಿರ್ಧಾರ ಬಿಂಬಿಸುವ ಭಿತ್ತಿ ಚಿತ್ರ ರಚಿಸಿ10ನಿಮಿಷ
   Turn the page draw a poster to depict your resolutions

7. ಘೋಷಣೆ ರಚಿಸಿ, ಭಿತ್ತಿ ಚಿತ್ರದಲ್ಲಿ ಬರೆಯಿರಿ 2 ನಿಮಿಷ
   Compose slogan and write in the poster

8. ಅಂತಿಮ ಅವಲೋಕನೆ 2 ನಿಮಿಷ
Final touch

9. 1 ರಿಂದ 10 ಎಣಿಸಿದ ತಕ್ಷಣ ಲೇಖನಿ ಕೆಳಗಿಡಿ
Soon 1 to 10 count down put your pen down

ಈ ಕಾರ್ಯಕ್ರಮದ ನಾಯಕಿಯರಯ ಪ್ರತಿ ಅಂಶದ ಮುಂದೆ ನೀಡಿರುವ ಸಮಯವನ್ನು ಅನುಸರಿಸಿ ಚಟುವಟಿಕೆಯನ್ನು ನಿಯಂತ್ರಿಸುತ್ತಾ ಹೋಗಬೇಕು. ಈ ಕಾರ್ಯಕ್ರಮದ ಅವಧಿ ಒಟ್ಟು 30 ನಿಮಿಷ

**ಚಟುವಟಿಕೆ 4: ಅಲಂಕಾರ –ವಿಕಾರ(ನಕ್ಕು ನಲಿಯುವ ಕಾರ್ಯಕ್ರಮ)**

ಅಲಂಕಾರ ವಸ್ತುಗಳನ್ನು 10 ಗುಂಪಿನಲ್ಲಿಡುವುದು. ಒಂದು ಗುಂಪಿಗೆ 4 ಜೋತೆ ಸ್ಕೌ/ಗೈ ಬಿಡುವುದು 10 ನಿಮಿಷ ಸಮಯ ನೀಡುವುದು. ನಿತ್ಯ ಉಡುಪಿನಲ್ಲಿ ಒಳಗೆ ಹೋಗಿ ಹೊರಗೆ ಬರುವಾಗ ಭಿನ್ನ ಅಲಂಕಾರದಲ್ಲಿ ಬರಬೇಕು.

**ಚಟುವಟಿಕೆ 5: ಕಿರುನಾಟಕ-Skit**

ಮೌಲ್ಯ, ನೀತಿ, ಇತಿಹಾಸ, ಸಾಮಜಿಕ, ಹಾಸ್ಯ, ಜಾನಪದ ಇವುಗಳ ಕಿರುನಾಟಕವನ್ನು 10 ನಿಮಿಷ ಮೀರದಂತೆ ಆಡಬೇಕು. ಜಿಲ್ಲೆಗೆ ಒಂದೇ ಅವಕಾಶ, ವೇಷ ಭೂಷಣ ಸಹಿತ ನಾಟಕಕ್ಕೆ ಮಾತ್ರ ಮಾನ್ಯತೆ.

**ಚಟುವಟಿಕೆ 6: ರಸಪ್ರಶ್ನೆ - Quiz**

**ವಿಷಯ:**- ಸ್ಕೌಟಿಂಗ್-ಗೈಡಿಂಗ್ ಮತ್ತು ಸಾಮಾನ್ಯ ಜ್ಞಾನ

**ವಿಧಾನ:**

1. ಪ್ರಶ್ನೆಗಳು 2. ಶ್ರವಣ 3. ದೃಶ್ಯ 4. ಪ್ರತ್ಯಕ್ಷಿಕೆ 5. ಪ್ರದರ್ಶನ

## ಸ್ಕಿಲ್-ಓ-ರಾಮ ಚಟುವಟಿಕೆಗಳು

| ಈ ಕೆಳಕಂಡ ವಸ್ತುಗಳನ್ನು ತಯಾರಿಸುವುದು & ಅದಕ್ಕೆ ಬೇಕಾದ ಸಾಮಗ್ರಿಗಳನ್ನು ತರುವುದು | | | |
|---|---|---|---|
| 1 | ಮೇಣದ ಬತ್ತಿ | 6 | ರಟ್ಟಿನ ಪ್ಯಾಡ್ ತಯಾರಿಕೆ |
| 2 | ತರಕಾರಿಗಳಿಂದ ವಿವಿಧ ಆಕೃತಿಗಳು | 7 | ರಂಗೋಲಿ ಹಾಕುವುದು |
| 3 | ಕಾಗದದಿಂದ ವಿವಿಧ ಆಕೃತಿಗಳು | 8 | ಗಾಳಿಪಟ |
| 4 | ಮಣ್ಣಿನಿಂದ ಬಳಕೆ ವಸ್ತುಗಳು | 9 | ಪರಿಸರದ ಬಗ್ಗೆ ಚಿತ್ರಕಲೆ |
| 5 | ಸೀಮೆಸುಣ್ಣ | 10 | ಬ್ಯಾಕ್ ವುಡ್ಸ್‌ಮ್ಯಾನ್ ಕುಕ್ಕಿಂಗ್ |

## ಸಾಹಸಮಯ ಚಟುವಟಿಕೆಗಳು

| ಈ ಕೆಳಕಂಡ ವಸ್ತುಗಳನ್ನು ತಯಾರಿಸುವುದು & ಅದಕ್ಕೆ ಬೇಕಾದ ಸಾಮಗ್ರಿಗಳನ್ನು ತರುವುದು | | | |
|---|---|---|---|
| 1 | ನೆಟ್ ಏರುವುದು | 7 | ಏಣಿ ಕ್ರಾಸಿಂಗ್ |
| 2 | ಗೋಡೆ ಏರುವುದು | 8 | ನೆಲದಲ್ಲಿ ಕ್ರಾಲಿಂಗ್ |
| 3 | ಗೋಪುರ ಏರುವುದು | 9 | ಮಂಕಿ ಬ್ರಿಡ್ಜ್ ಕ್ರಾಸಿಂಗ್ |
| 4 | ಟೈರ್ ಟನಲ್ ಕ್ರಾಸಿಂಗ್ | 10 | ಟೈರ್ ಟನಲ್ |
| 5 | ಟೈರ್ ಗೋಡೆ ಏರುವುದು | 11 | ಬಂಬೂ ಬ್ರಿಡ್ಜ್ |
| 6 | ತೂಗುವ ಏಣಿ ಏರುವುದು | 12 | ಟೈರ್ ಸ್ವಿಂಗ್ |

## ಕಾರ್ಯಕ್ರಮಗಳು

| | | |
|---|---|---|
| 17.08.2014 | 12-30 | ಜಿಲ್ಲಾ ತಂಡಗಳ ಆಗಮನ, ನೊಂದಾವಣಿ & ತಂಗುವುದು |
| | 14-00 | ಜಿಲ್ಲಾ ತಂಡದ ನಾಯಕರ ಮತ್ತು ಜಾಂಬೋರೇಟ್ ಸಿಬ್ಬಂದಿ ಸಭೆ |
| | 16-00 | ಜಾಂಬೋರೇಟ್ ಸ್ಥಳದ ವೀಕ್ಷಣೆ, ಶಿಬಿರಗಳ ಅಭಿವೃದ್ಧಿ |
| | 18-30 | ಜಾಂಬೋರೇಟ್ ಸಿಬ್ಬಂದಿ ನಾಯಕರ ಸಭೆ |
| | 20-30 | ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳಿಂದ ಶಿಬಿರಾಗ್ನಿ |
| 18.08.2014 | 06-30 | ಬಿ.ಪಿ.ಯವರ ಆರು ವ್ಯಾಯಾಮಗಳು |
| | 07-30 | ಪ್ರಾರ್ಥನೆ, ಉಪ-ಶಿಬಿರಗಳಲ್ಲಿ ಧ್ವಜಾರೋಹಣ |
| | 09-00 | ಪ್ರಾರಂಭೋತ್ಸವಕ್ಕೆ ಸಿದ್ಧತೆ |
| | 10-30 | ಶಿಬಿರದ ಅಭಿವೃದ್ಧಿ (ಗುಡಾರ, ಜಿಲ್ಲಾಗೇಟ್, ಶಿಬಿರ ಕೌಶಲ್ಯ, ಗ್ಯಾಡ್ಜೆಟ್) |
| | 15-00 | ಪ್ರಾರಂಬೋತ್ಸವಕ್ಕೆ ಸಮಾವೇಶ |
| | 16-00 | ಪ್ರಾರಂಭೋತ್ಸವ ಸಮಾರಂಭ |
| | 18-30 | ಜಿಲ್ಲಾ ತಂಡದ ನಾಯಕರ & ಜಾಂಬೋರೇಟ್ ಸಿಬ್ಬಂದಿ ಸಭೆ |
| | 20-30 | ಉಪ ಶಿಬಿರಗಳಲ್ಲಿ ಶಿಬಿರಾಗ್ನಿ |
| 19.08.2014 | 06-30 | ಬಿ.ಪಿ.ಯವರ ಆರು ವ್ಯಾಯಾಮಗಳು |
| | 07-30 | ಪ್ರಾರ್ಥನೆ, ಉಪ-ಶಿಬಿರಗಳಲ್ಲಿ ಧ್ವಜಾರೋಹಣ |
| | 09-00 ರಿಂದ 12-30 | ಜಾಂಬೋರೇಟ್ ಪ್ರಶಸ್ತಿ ಚಟುವಟಿಕೆಗಳು |
| | 14-00 | ಆಹ್ಲಾದಕರ ಆಟಗಳು, ಯುವವೇದಿಕೆ |
| | 17-30 | ಜಿಲ್ಲಾ ತಂಡದ ನಾಯಕರ ಮತ್ತು ಜಾಂಬೋರೇಟ್ ಸಿಬ್ಬಂದಿ ಸಭೆ |
| | 18-30 | ಕಿರು ನಾಟಕಗಳು (ಸ್ಕೌಟ್ಸ್ & ಗೈಡ್ಸ್ ಉದ್ದೇಶ ಹಾಗು ಧ್ಯೇಯದ ಬಗ್ಗೆ)(16 ಜಿಲ್ಲೆಗಳಿಂದ) |
| 20.08.2014 | 06-30 | ಬಿ.ಪಿ.ಯವರ 6 ವ್ಯಾಯಾಮಗಳು |
| | 07-30 | ಪ್ರಾರ್ಥನೆ, ಉಪ-ಶಿಬಿರಗಳಲ್ಲಿ ಧ್ವಜಾರೋಹಣ |
| | 09-00 ರಿಂದ 12-30 | ಜಾಂಬೋರೇಟ್ ಪ್ರಶಸ್ತಿ ಚಟುವಟಿಕೆಗಳು |
| | 14-00 | ಹಿಮಾಲಯ ವೃಕ್ಷಮಣಿಧಾರಕರ ಸಭೆ, ಬ್ಯಾಂಡ್ ಪ್ರದರ್ಶನಅಲಂಕಾರ ವಿಕಾರ |

| | | |
|---|---|---|
| | 15-30 | ಸಾಂಸ್ಕೃತಿಕ ಪ್ರದರ್ಶನ (ಪೇಜೆಂಟ್ ಷೋ) |
| | 17-30 | ಜಿಲ್ಲಾ ತಂಡದ ನಾಯಕರ ಮತ್ತು ಜಾಂಬೋರೇಟ್ ಸಿಬ್ಬಂದಿ ಸಭೆ |
| | 18-30 | ಕಿರು ನಾಟಕಗಳು (ಸ್ಕೌಟ್ಸ್ & ಗೈಡ್ಸ್ ಉದ್ದೇಶ & ಧ್ಯೇಯದ ಬಗ್ಗೆ)(17 ಜಿಲ್ಲೆಗಳಿಂದ) |
| 21.08.2014 | 06-30 | ಬಿ.ಪಿ.ಯವರ ಆರು ವ್ಯಾಯಾಮಗಳು |
| | 07-30 | ಪ್ರಾರ್ಥನೆ, ಉಪ-ಶಿಬಿರಗಳಲ್ಲಿ ಧ್ವಜಾರೋಹಣ |
| | 09-00 ರಿಂದ 12-30 | ಜಾಂಬೋರೇಟ್ ಪ್ರಶಸ್ತಿ ಚಟುವಟಿಕೆಗಳು |
| | 14-00 | ತರಬೇತಿ ನಾಯಕರ ಸಮಾವೇಶ, ರಸಪ್ರಶ್ನೆ, ಅಗ್ರಗಾಮಿತ್ಯ ಚಟುವಟಿಕೆಳು |
| | 15-30 | ಜಿಲ್ಲಾ ದರ್ಶನ (ವಸ್ತುಪ್ರದರ್ಶನ, ಜನಪದ ಸಾಹಿತ್ಯ ಇತ್ಯಾದಿ) |
| | 17-30 | ಜಿಲ್ಲಾ ತಂಡದ ನಾಯಕರ ಮತ್ತು ಜಾಂಬೋರೇಟ್ ಸಿಬ್ಬಂದಿ ಸಭೆ |
| | 18-30 | ಭವ್ಯ ಶಿಬಿರಾಗ್ನಿ |
| 22.08.2014 | 06-30 | ಬಿ.ಪಿ.ಯವರ ಆರು ವ್ಯಾಯಾಮಗಳು |
| | 07-30 | ಪ್ರಾರ್ಥನೆ, ಉಪ-ಶಿಬಿರಗಳಲ್ಲಿ ಧ್ವಜಾರೋಹಣ |
| | 09-00 ರಿಂದ 12-30 | ಜಾಂಬೋರೇಟ್ ಪ್ರಶಸ್ತಿ ಚಟುವಟಿಕೆಗಳು |
| | 14-00 | ಪಥಚಲನ |
| | 15-00 | ಸಮಾರೋಪ ಸಮಾರಂಭಕ್ಕೆ ಸಮಾವೇಶ |
| | 16-00 | ಸಮಾರೋಪ ಸಮಾರಂಭ |
| | 19-30 | ಜಿಲ್ಲಾ ತಂಡದ ನಾಯಕರ & ಜಾಂಬೋರೇಟ್ ಸಿಬ್ಬಂದಿ ಸಭೆ |
| | 20-30 | ಜಾಂಬೋರೇಟ್ ನೈಟ್ |
| 23.08.2014 | 07-00 | ಸರ್ವಧರ್ಮ ಪ್ರಾರ್ಥನೆ |
| | 07-30 | ಪ್ರಾರ್ಥನೆ, ಉಪ-ಶಿಬಿರಗಳಲ್ಲಿ ಧ್ವಜಾರೋಹಣ |
| | 08-00 | ಶಿಬಿರಗಳ ಸ್ವಚ್ಛತೆ & ಸಾಮಗ್ರಿಗಳನ್ನು ಹಿಂದಿರುಗಿಸುವುದು |
| | 09-30 | ಉಪ-ಶಿಬಿರಗಳಲ್ಲಿ ಧ್ವಜ ಅವರೋಹಣ |

10-30 ಮುಕ್ತಾಯ ಸಮಾರಂಭ & ಸಾಮಾನ್ಯ ಧ್ವಜ ಅವರೋಹಣ

11-00 ಜಾಂಬೋರೇಟ್ ಸಿಬ್ಬಂದಿ ನಾಯಕರ ಸಭೆ ಮತ್ತು ಮೌಲ್ಯಮಾಪನ

## ಉಪ-ಶಿಬಿರಗಳ ಚಲನೆ

| ದಿನಾಂಕ | ಹೊರಸಂಚಾರ | ಸಮುದಾಯ ಸೇವೆ | ಸಾಹಸಮಯ ಚಟುವಟಿಕೆಗಳು | ಸ್ಕಿಲ್-ಓ-ರಾಮ |
|---|---|---|---|---|
| 19-08-2014 | ಉಪಶಿಬಿರ 1 | ಉಪಶಿಬಿರ 2 | ಉಪಶಿಬಿರ 3 | ಉಪಶಿಬಿರ 4 |
| 20-08-2014 | ಉಪಶಿಬಿರ 2 | ಉಪಶಿಬಿರ 3 | ಉಪಶಿಬಿರ 4 | ಉಪಶಿಬಿರ 1 |
| 21-08-2014 | ಉಪಶಿಬಿರ 3 | ಉಪಶಿಬಿರ 4 | ಉಪಶಿಬಿರ 1 | ಉಪಶಿಬಿರ 2 |
| 22-08-2014 | ಉಪಶಿಬಿರ 4 | ಉಪಶಿಬಿರ 1 | ಉಪಶಿಬಿರ 2 | ಉಪಶಿಬಿರ 3 |
| | | | | |

**ಎಂ.ಎ. ಖಾಲಿದ್**
ರಾಜ್ಯ ಕಾರ್ಯದರ್ಶಿ

**ಕೊಂಡಜ್ಜಿ. ಬ. ಷಣ್ಮುಖಪ್ಪ**
ರಾಜ್ಯ ಮುಖ್ಯ ಆಯುಕ್ತ

| | |
|---|---|
| ಜಾಂಬೋರೇಟ್ ಉಪ-ಮುಖ್ಯಸ್ಥರು | **ಶ್ರೀಮತಿ ಶಾಂತ ವಿ.ಆಚಾರ್ಯ,**<br>ರಾಜ್ಯ ಆಯುಕ್ತರು (ಗೈಡ್ಸ್) |
| ಜಾಂಬೋರೇಟ್ ಕಾರ್ಯದರ್ಶಿ | **ಶ್ರೀ ಎಂ.ಎ. ಖಾಲಿದ್,**<br>ರಾಜ್ಯ ಕಾರ್ಯದರ್ಶಿ |
| ಜಾಂಬೋರೇಟ್ ಖಜಾಂಚಿ | **ಶ್ರೀ ಟಿ. ಪ್ರಭಾಕರ್,**<br>ರಾಜ್ಯ ಕೋಶಾಧಿಕಾರಿ |
| ಜಾಂಬೋರೇಟ್ ಸಹಕಾರ್ಯದರ್ಶಿ | **ಶ್ರೀ ಎಂ.ಎ.ಚೆಲ್ಲಯ್ಯ,**<br>ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್ಸ್)<br><br>**ಶ್ರೀಮತಿ ಜಿ.ವಿ.ರಾಮಲತಾ,**<br>ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್) |
| ಜಾಂಬೋರೇಟ್ ಸಂಯೋಜಕರು : | **ಶ್ರೀ ಚಿನ್ನಸ್ವಾಮಿ ರೆಡ್ಡಿ**<br>ಕೇಂದ್ರ ಸ್ಥಾನಿಕ ಆಯುಕ್ತರು (ತರಬೇತಿ) |
| ಜಾಂಬೋರೇಟ್ ಸಂಘಟಿಕರು | **ಶ್ರೀ ಟಿ.ಎ.ಮಂಜುನಾಥಾಚಾರ್,**<br>ಪ್ರಭಾರಿ ಎಸ್‌ಓಸಿ(ಎಸ್)<br><br>**ಶ್ರೀಮತಿ ಸಿ.ಮಂಜುಳ,**<br>ಪ್ರಭಾರಿ ಎಸ್‌ಓಸಿ(ಎಸ್)<br><br>**ಶ್ರೀ ಎಲ್.ಟಿ.ಲೋಕೇಶ್,**<br>ಪ್ರಭಾರಿ ಎಸ್‌ಟಿಸಿ(ಎಸ್)<br><br>**ಶ್ರೀಮತಿ ಕೆ.ವಿ.ಶ್ಯಾಮಲ,**<br>ಪ್ರಭಾರಿ ಎಸ್ ಟಿ ಸಿ(ಜಿ) |



Lord Baden Powell



Olave Lady Baden Powell



Dr. Annie Besant



(1927) Sri Kanteerava Narasimharaja Wodeyar as Chief Scout & Prince Jayachamaraja Wodeyar as Chief Cub